ವಿಜಯನಗರದ ಅರಸನಾದ ಎರಡನೇ ದೇವರಾಯನು ಕಾಮಾಸಕ್ತನಾಗಿದ್ದನು. ಮುದ್ಗಲ್ಲ ಪಟ್ಟಣದಲ್ಲಿರುತ್ತಿರ್ದ ಓರ್ವ ಅಕ್ಕಸಾಲಿಗನ ಮಗಳಾದ ನಿಹಲೆಯ ಅಪ್ರತಿಮ ಸೌಂದರ್ಯವನ್ನು ಕೇಳಿ ಕೇಳಿ ಅವಳನ್ನು ಲಗ್ನವಾಗಬೇಕೆಂದಿಚ್ಛಿಸಿ, ಅವಳ ತಂದೆಗೆ ಬಹು ಪರಿಯಾಗಿ ಆಶೆ ತೋರಿಸಿ ಎಷ್ಟು ಯತ್ನ ಮಾಡಿದರೂ ನಿಹಲೆಯು ರಾಯನನ್ನು ವರಿಸಲಾರೆನೆಂದು ನಿಶ್ಚಯವಾಗಿ ಹೇಳಿದಳು. ಕೂಡಲೆ ರಾಯನು ಸಂತಪ್ತನಾಗಿ ಅವಳನ್ನು ಹಿಡಿದು ತರಲು ಸೈನಿಕರನ್ನು ಕಳುಹಿದನು. ಈ ಸುದ್ದಿಯನ್ನು ಮೊದಲೇ ಅರಿತಿದ್ದ ನಿಹಲೆಯು ಇಷ್ಟರೊಳಗಾಗಿಯೇ ವೃದ್ಧನಾದ ತಂದೆಯನ್ನು ಕರೆದುಕೊಂಡು ಪಟ್ಟಣವನ್ನು ಬಿಟ್ಟು ಅಡವಿಗೆ ಹೋಗಿ, ಒಂದು ಗುಡಿಸಲಿನಲ್ಲಿರುತ್ತಿರ್ದಳು. ಸೈನಿಕರು ಬರಿಗೈಯಿಂದ ಬರಲು ರಾಯನು ಏನಾದರೊಂದುಪಾಯದಿಂದ ಅಡವಿಗೆ ಹೋಗಬೇಕೆಂದೆಣಿಸಿ, ಬೇಟೆಯ ನೆವದಿಂದ ಅಡವಿಗೆ ಹೋಗಿ ಅಕಸ್ಮಾತ್ತಾಗಿ ನಿಹಲೆಯ ಗುಡಿಸಲಕ್ಕೆ ನೀರುಕುಡಿಯಬೇಕೆಂದು ಹೋದನು. ಇಲ್ಲಿಯ
ಮುಖವನ್ನೊಬ್ಬರು ನೋಡಿರಲಿಲ್ಲ. ಒಮ್ಮೆ
ನಸೋತನು. ನಿಹಲೆಯ ಹಾವ ಭಾವಗ
ಯನು ಮದುವೆಯಾಗುವೆನೆಂದು ಹೇಳಿ

ಇಷ್ಟರೊಳಗಾಗಿ ಸರದಾರನೋರ್ವನು ನಿಹಲೆಯನ್ನು ತಾನು
ವರಿಸಬೇಕೆಂದು ಅಲ್ಲಿಗೆ ಬಂದು, ರಾಯನನ್ನು ಕಂಡು, ನಿಹ
ಲೆಯು ಯುದ್ಧಮಾಡದ ಹೊರ್ತು ದೊರಕಲಾರಳೆಂದು ಹೇಳಿ
ದನು. ಕೂಡಲೇ ರಾಯನು, ತಾನು ಯುದ್ಧಕ್ಕೆ ಸಿದ್ಧನಾ
ದರೆ ಜನರಲ್ಲಿ, ತಾನು ಬಾಲೆಯ ಸಲುವಾಗಿ ತನ್ನ ಸರದಾರನ
ಸಂಗಡ ಯುದ್ಧ ಮಾಡಿದನೆಂಬ ಅಪವಾದವು ಬರುವದೆಂದೆ
ಣಿಸಿ ಸರದಾರನಿಗೆ ನಿಹಲೆಯನ್ನು ಲಗ್ನವಾಗಲು ವಚನವನ್ನಿ
ತ್ತನು. ಕೂಡಲೇ ಸರದಾರನು ನಿಹಲೆಯ ಸಮೀಪಕ್ಕೆ ಬಂದು
ಎಷ್ಟು ಬೇಡಿಕೊಂಡರೂ ನಿಹಲೆಯು ರಾಯನಹೊರ್ತು ಉಳಿದ
ವರನ್ನು ಲಗ್ನವಾಗಲಾರೆನೆಂದು ಸ್ಪಷ್ಟವಾಗಿ ಹೇಳಿದಳು.
ರಾಯನು ತಾನೊಮ್ಮೆ ವಚನ ಕೊಟ್ಟು, ಅದನ್ನು ಮುರಿದು
ಲಗ್ನವಾಗಲಾರೆನೆಂದು ಹೇಳಿ ವಿಜಯನಗರದ ದಾರಿಹಿಡಿದನು
ಸರದಾರನಾದರೂ ನಿರಾಶನಾಗಿ, ಬಂದ ದಾರೀಹಿಡಿದು ಹೋ
ದನು. ನಿಹಲೆಯು ಕಡೆತನಕ ಹಾಗೆಯೇ ಬ್ರಹ್ಮಚರ್ಯ
ದಿಂದಿದ್ದು ದೇವರ ಧ್ಯಾನದಲ್ಲಿ ಕಾಲಕಳೆಯುವದನ್ನು ನಿರ್ಧರಿಸಿ
ಅಲ್ಲಿಯೇ ಇರಲಾರಂಭಿಸಿದಳು.

— ಸಂಪಾದಕ



॥ ಶ್ರೀ ಚೌಡೇಶ್ವರೀ ಪ್ರಸನ್ನ ॥

# ಪ್ರೇಮಪ್ರಭಾವ.

( ಭಾ. ಷ. )

ವೀರನರಪತಿ ದೇವರಾಯನು[1] ।
ಚಾರನತಿ ಬಣ್ಣಿಸುತ ಪೇಳಿದ ।
ಚಾರುಗಾತ್ರಿಯು ನಿಹಲೆಯನು[2] ತಾವರಿಸಬೇಕೆಂದು ॥
ತೋರಿಸುತ ಲಾಗವಳ ತಂದೆಗೆ ।
ಬಾರಿ ಬಾರಿಗೆ ದುಡ್ಡಿನಾಶೆಯು ।
ನೇರಿಸುವೆ ಘನಪದವಿಗೆಂದವನವಗೆ ಪೇಳಿದನು ॥ ೧ ॥

ಕಡುಹರುಷದಿಂದವಳ ತಂದೆಯು ।
ಬಡತನವು ದೂರಾಗುವದು ಎಂ ।
ದೊಡನೆ ತನ್ನಯ ಮಗಳಿಗುಪದೇಶವನು ಮಾಡಲ್ಕೆ ॥
ನಡುಹರೆಯದವಳಾದ ನಿಹಲೆಯು ।
ಒಡನೆ ಮನವನು ನಿರ್ಧರಿಸುತಲೆ ।
ನುಡಿದಳೀಪರಿಮನದೊಳಿದ್ದುದನೆಲ್ಲ ಜನಕನಿಗೆ ॥ ೨ ॥

ಬೇಡ ಬಡವರು ಕೇಳು ಎಮಗೀ ।
ನಾಡಿನೊಡೆಯನ ಗೊಡವೆ ಸುಮ್ಮನೆ ।
ಕಾಡದಿರು ಹಣದಾಶೆಯನು ತೋರಿಸುತ ಲೆನಗೀಗ ॥

---

೧ ಎರಡನೇ ದೇವರಾಯನು.

೨ ಮುದ್ಗಲ್ಲ ಪಟ್ಟಣದಲ್ಲಿರುತ್ತಿರ್ದ ಒಬ್ಬ ಅಕ್ಕಸಾಲಿಗನ ಮಗಳು.

ಪಾಡಿಕೆಯ ದಾರಿಯನು ಬಿಡುತಲೆ ।
ಓಡದಿರು ಶ್ರೀಜನಕನೇನಾ ।
ನಾಡುವೆನು ಸತ್ಯವನು ಬಿಡು ನಿನ್ನೀವಿಚಾರವನು ॥ ೩ ॥

ಕಡೆಗುಪಾಯವ ಕಾಣಲಾರದೆ ।
ಕಡುಭಯದಿ ಮಗಳೆಲ್ಲ ಮಾತನು ।
ನಡಿಸಲಾರಳು ಯೆನುತಲರಸಗೆ ಹೇಳಿ ಕಳುಹಿದನು ॥
ಒಡನೆ ಕೋಪದಿ ದೇವರಾಯನು ।
ಬಿಡದೆನಿಹಲೆಯ ಕರೆತರಲು ತ ।
ನ್ನೆಡೆಗೆ ಮಂತ್ರಿಯ ಕಳುಹಬೇಕೆಂದವನ ಕರೆಸಿದನು ॥ ೪ ॥

ಬರುತ ಜವದಿಂ ಸಚಿವನಿಲ್ದನು ।
ಕರವ ಜೋಡಿಸಿ ನಮಿಸುತಾಕ್ಷಣ ।
ದರಸನಪ್ಪಣೆಯೇ ನಿರುವದೆಂಬುದನು ನೀಕ್ಷಿಸುತ ॥
ಹೊರಡು ನೀನೀಕ್ಷಣದಿ ಜನರನು ।
ಕರೆದುಕೊಳ್ಳುತ ತಡವ ಮಾಡದೆ ।
ಕರೆತರಲು ನಿಹಲೆಯನು ಎನುತರಸವಗೆ ಪೇಳಿದನು ॥೫॥

ಇರುತಿರುವಳಾ ಸುಂದರಿಯು ಕೇಳ್ ।
ಪರಮ ದಾರಿದ್ರ್ಯವನು ಭೋಗಿಸು ।
ತಿರುವ ಮನುಜನ ಸದನದೊಳು ಮುದಗಲ್ಲ ಪಟ್ಟಣದಿ ।
ಅರಮನೆಯೊಳಿರುತೆನ್ನ ಸಂಗಡ ।
ಅರಸಿಯಾಗಲು ಒಲ್ಲೆನೆಂಬಳು ।
ಸರಸಿಜೋದ್ಭವಳಂತೆ ತೋರುವಳೆಂತು ಬಣ್ಣಿಪೆನು ॥೬॥

ಇಂದು ಮನಸೋತಿರುವೆನವಳರ ।
ವಿಂಪ ಮುಖಕಿನ್ನೀಗ ತಡೆಯೆನು ।
ಎಂದೆನುತಮನ ಬಿಚ್ಚಿ ಬಿಡದೆಲ್ಲವನು ಪೇಳಿದನು ॥
ಬಂದುಮಾಡುತಲೋಲಗವಬರು ।
ತಂದು ತಾನರ ಮನೆಗೆ ಮನದಲಿ ।
ನೊಂದು ಮಲಗಿದನಾಗ ಪರ್ಯಂಕದಲಿ ಚಿಂತಿಸುತ ॥೭॥
ಕನಸಿನೊಳು ಸಹ ನಿಹಲೆಯನುಕಂ ।
ಡನುನಯದಿ ಮಾತಾಡಿಸಲು ತಾ ।
ಮನವ ಮಾಡುತ ಬಡಬಡಿಸಲಾರಂಭಿಸಿದನಾಗ ॥
ಜನಿಸಿತೆಂದರೆ ಕಾಮವಾಸನೆ ।
ವನದೊಳೊಣಗಿರುವಂಥ ಹುಲ್ಲನು ।
ಕ್ಷಣದೊಳಗ್ನಿಯು ದಹಿಸುವಂದದಿ ಸುಡುವದೆಲ್ಲರನು ॥೮॥
ಹೊರಟರಾದಿನ ತಡವ ಮಾಡದೆ ।
ಪುರವ[೧] ಬಿಡುತಲೆ ಜನರು ಭರದಿಂ ।
ತರಲು ನಿಹಲೆಯುನರಸನೆಡೆಗಾಕ್ಷಣದಿ ನಿಶ್ಚಯಿಸಿ ॥
ಅರಗಳಿಗೆಯೊಳು ಮುಟ್ಟುತಾಗಲೆ ।
ಹೊರಟುಹೋಗಿಹರವರುಮುದಗಲ್ ।
ಪುರವ ಬಿಡುತಲೆ ವನಕೆ ಯೆಂಬಾ ವಾರ್ತೆಯನು ಕೇಳೀ ॥೯॥
ಮರಳಿ ಹೊರಟರು ಮನದಿ ಚಿಂತಿಸು ।
ತರಸನೇನೆಂಬುವನೊ ಯೆನ್ನುತ ।
ಪರಮ ಭಯದಿಂ ಮನದಿ ಗಾಬರಿಗೊಳುತಲಾಕ್ಷಣದಿ ॥

೧. ವಿಜಯನಗರವನ್ನು

ಬರಲು ನಿಹಲೆಯ ಬಿಡುತ ಬೇಗದೊ ।
ಳರಸನಿದ್ದೆಡೆ ಹಸಿದ ಮನುಜನ ।
ತೆರದಿಕೋಪದಿ ಕುದಿಯಲಾರಂಭಿಸಿದನಾ ಭೂಪಾ ॥೧೦

ಪೊಡವಿಗೊಡೆಯನು ಮನದಿ ಚಿಂತಿಸು ।
ತಡವಿಯೊಳು ವಾಸಿರ್ಪ ನಿಹಲೆಯ ।
ಬಿಡದೆ ದೊರಕಿಸುವುದಕೆ ಹಗಲಿರುಳೆಲ್ಲ ಮನದೊಳಗೆ
ಕಡೆಗೆ ಬೇಟೆಯನೆವದಿ ತಾನೇ ।
ಒಡನೆ ತಡೆಯದೆ ನಿಹಲೆ ವಾಸಿಪ ।
ಅಡವಿಗಾಕ್ಷಣ ಪೋಗುವದೆಲೇಸೆಂದು ನಿರ್ಧರಿಸಿ ॥ ೧೧

ಹೊರಟ ನವನೀ ಪಾಲಬೇಗದಿ ।
ಕರೆಯಿಸುತಲಾಸಚಿವನಂನೀ ।
ಜರುಗಿಸುವದೀ ರಾಜ್ಯಕಾರ್ಯಗಳೆಂದು ಪೇಳುತಲಿ ॥
ಬರುತ ಲಡವಿಯ ಮುಟ್ಟಿದನು ಬಲು ।
ಭರದಿ ಸುಂದರಿಯಾದ ನಿಹಲೆಯ ।
ವರಸುಮುಖವನು ಕಾಣಬೇಕೆಂಬುತ್ಕಟೆ ಚ್ಛೆಯಲಿ ॥೧೨

ರವಿಯು ನಭಮಧ್ಯದೊಳು ಬರಲಾ ।
ಅವನಿ ಪಾಲನು ಹಯವ ನಿಲ್ಲಿಸಿ ।
ತವಕದಿಂ ನೀರಡಿಸಿ ಸುತ್ತಲು ನೋಡಲನುವಾದಾ ॥
ಕಡೆಗೆ ಕಾಣುತಲೊಂದು ಗುಡಿಸಲ ।
ತಡೆಯದಲೆ ಬರುತಲ್ಲಿ ಗಾಕ್ಷಣ ।
ಕೊಡಲು ನೀರನು ಕೇಳಿದನು ನಂಮ್ರದಲಿ ಕುಡಿಯಲ್ಕೆ॥೧೩

ಗಡನೆ ಒಳಗಿಂದೋರ್ವ ಸುಂದರಿ ।
ಪಿಡಿದು ನೀರಿನ ಪಾತ್ರೆಯನು ತಾ ।
ನಡಿಯಿಡುತ ಬರುವದನು ಮೆಲ್ಲಗೆ ಕಾಣುತಾಕ್ಷಣದಿ ॥
ಪಿಡಿದು ಕರವೆರಡಾಗ ಮುಂದಕೆ ।
ಪೊಡವಿಗೊಡೆಯನು ಕಡುಹರುಷದಿಂ ।
ಕುಡಿಯಲನುವಾದವನು ತಡೆದನು ವಿಸ್ಮಯದೊಳಾಗ॥೧೪॥

ನಗೆ ಮೊಗದಿ ಸುಂದರಿಯು ತನ್ನೆದು ।
ರಿಗತಿ ಚಲ್ವಿಕೆಯನ್ನು ಬೀರುತ ।
ಬಿಗಿದು ಸೆರಗನು ನಿಂತಿರುವದಂ ಕಂಡು ಬೆರಗಾಗಿ ॥
ಬಿಗಿಹಿಡಿಯಲಾರದಲೆ ಮನವನು ।
ಬಗೆದು ತರುಣಿಯ ಪೆಸರ ತಿಳಿಯಲು ।
ನಗೆಮೊಗದಿ ಬೆಸಗೊಂಡನವನೀಪಾಲವನಿತೆಯನು ॥೧೫॥

ವನಪು ವಯ್ಯಾರದಲಿ ಸುಂದರ ।
ವನಿತೆ ನಾ ಪೇಳುವೆನು ನೀಕೇ ।
ಳೆನುತ ತನ್ನನು ಜನರು ಕರೆವರು ನಿಹಲೆಯೆಂದೆನುತ ॥
ವನದೊಳೀ ಮಧ್ಯಾಹ್ನ ಸಮಯದಿ ।
ಮನುಜನೇಕೀ ಸ್ಥಳಕೆ ಬಂದಿಯೊ ।
ಘನತರೈಶ್ವರ್ಯವನು ಭೋಗಿಪನಂತೆ ತೋರುವಿಯೋ ?
॥೧೬॥

ತರುಣಿ ಯಿಷ್ಟಕೆ ಸುಮ್ಮನಾಗದೆ ।
ಪುರಜನರು ನಿನಗಾವ ಹೆಸರನು !
ಕರೆಯುವರು ಹೇಳೆನಗೆ ಯೆಂದೆನಲಾಗ ನೃಪವರನು ॥

ಕರೆಯುವರು ಜನರೆಲ್ಲ ರೆನ್ನನು ।
ತರುಣಿಯಾಲಿಸು ಪೇಳುವೆನು ನಾ ।
ವರಮಹಾನೃಪ ದೇವರಾಯನು ಯೆಂದು ಮುದದಿಂ
॥೧೭

ಸುಂದರಿಯೆ ಚಿತ್ತೈಸು ನಿನ್ನೀ ।
ಯಿಂದು ವದನದ ದರ್ಶನಕೆ ನಾ ।
ನಿಂದು ಧಾವಿಸಿ ಮೋಹಪರವಶನಾಗಿ ಬಂದಿರುವೆ ॥
ಎಂದೆನಲು ಕರ್ನಾಟ ಭೂಪನು ।
ತಂದ ಪಾತ್ರೆಯು ನಿರಿಸಿ ಕೆಳಗತಿ ।
ಮಂದದಿಂ ಮುಖಬಾಗಿಸಿದಳಾ ಸಿಹಲೆ ಲಜ್ಜೆಯಲಿ ॥೧೮

ಮೊದಲು ತಾನುಡಿದಿರುವ ವಚನವ[1]
ಪದುಮ ಲೋಚನೆ ನೆನೆಯುತಲೆ ಬಲು ।
ಕುದಿಯುತಲೆ ತಾನೊರಿಸಲೊಪ್ಪದಲಿರುವದಕೆ ಮನದಿ
ಮದನಿಗಾಕ್ಷಣ ಮನವ ಸೋಲುತ ।
ವದನವಂ ಮರೆಮಾಡಿಕೊಳ್ಳುತ ।
ಹೆದರಿದವಳಂತಾಗ ಬಹುಪರಿ ನಿಲ್ವಳವಳಲ್ಲೆ ॥೧೯

ನೋಡುತೊಬ್ಬರನೊಬ್ಬರತಿ ಕೊಂ ।
ಡಾಡಿ ಮನದೊಳಗವರ ರೂಪವ ।
ನಾಡಲಾರರು ಮನದೊಳಿದ್ದದನೆಲ್ಲ ಬಾಯ್ಬಿಡುತ ॥

---

೧ ಮೊದಲು ಇವನನ್ನು ಲಗ್ನವಾಗಲಾರೆನೆಂದು ತನ್ನ ತಂದೆಗೆ ಹೇಳಿ
ವಚನವನ್ನು.

ಒಡನೆ ನಿಹಲೆಯು ತನ್ನ ಭೀಷ್ಟನ ।
ನೊಡೆಯನಿಗೆ ನಾನಾ ಪ್ರಕಾರದಿ ।
ಬಿಡದೆ ತೋರಿಸುತಾಗ ನಿಂತಳು ನೆಲವ ನೀಕ್ಷಿಸುತ ॥೨೦॥
ತಿಳಿದು ನಿಹಲೆಯು ವಾಂಛಿತಾರ್ಥದ ।
ಒಲವ ಕುಂತಲಭೂಮಿಪಾಲನು[೧] ।
ನಳಿನಲೋಚನೆ ಸಿದ್ಧನಿರುವೆನು ನಿನ್ನನೊರಿಸಲ್ಕೆ ॥
ಕೇಳು ಚಿಂತೆಯ ಬಿಡುತಲೆನ್ನುತ ।
ಲಾಲಲಾಮನು ನುಡಿಯುತಾಕ್ಷಣ ।
ಬಾಲೆಯನು ಬಿಡುತಶ್ವವಿದ್ದೆಡೆ ತಿರುಗಿದನು ಜವದಿ॥೨೧॥
ಇತ್ತಲಾ ಸರದಾರನೋರ್ವನು ।
ಉತ್ತಮಾಶ್ವವನೇರಿ ನಿಹಲೆಯ ।
ನೆತ್ತಿಕೊಳ್ಳುತಲೊಯ್ಯಬೇಕೆಂಬಾಶೆಯಿಂದಾಗ ॥
ಒತ್ತರದಿ ಬರುತಿರಲು ಕಾಣುತ ।
ಲಿತ್ತ ನೃಪವರ ದೇವರಾಯನ ।
ಮತ್ತೆ ತಾಬಲು ಚಿಂತೆಗೊಳಗಾಗುತಲೆ ಮನದೊಳಗೆ॥೨೨
ಕಡೆಗೆ ನಿರ್ಧರಿಸಿದನು ಮನದೋ ।
ಳೊಡನೆ ಸದ್ಯದೊಳವನು ಬಂದಿಹ ।
ನಡವಿಗೀ ಸುಂದರಿಯ ವರಿಸಲ್ಕೆಂದು ಬಿಡದೀಗ ॥
ಕಡೆಗುಪಾಯವನೊಂದು ತರುಣನು ।
ಹುಡುಕಿ ಯುದ್ಧಕೆ ಸಿದ್ಧನಾಗಲು ।
ನುಡಿದನಾರಾಜನಿಗೆ ನಿಹಲೆಯ ನಿಚ್ಛಿಸಿದವೆಂದು ॥೨೩॥



---

೧ ಕರ್ನಾಟಕಕ್ಕೆ ಕುಂತಲವೆಂದೂ ಪ್ರತಿನಾಮಧೇಯ ಉಂಟು.

ಆಲಿಸುತನಿದನೆಲ್ಲ ರಾಜನು ।
ಕಾಲವನ್ನೀಕ್ಷಿಸುವದಕ್ಕಿದು ।
ವೇಳೆಯಲ್ಲೆಂದೆನುತ ಲಾಗತಿ ಚಿಂತೆಗೊಳಗಾಗಿ ॥
ಪಾಲಕನು ಸದ್ಧರ್ಮ ಬಿಡುತಲೆ ।
ಬಾಲೆಯನು ದೊರಕಿಸಲು ಬಲದಿಂ ।
ಕಾಳಗವ ಕೈಕೊಂಡನೆನ್ನುತ ನುಡಿಯುವರು ಜ
॥

ಎಂದು ಮನದೊಳುಚ್ಚಭಾವನೆ ।
ತಂದುನಾ ಕಾಳಗಕೆ ನಿಲ್ಲೆನು ।
ಇಂದು ನೀ ನಿಹಲೆಯನು ಪರಿಸೆಂದಾಗ ಪೇಳಿದನು ॥
ಮುಂದಿರುವ ಗುಡಿಸಲಕೆ ತರುಣನು ।
ಬಂದು ಹರುಷದಿ ತನ್ನನೊರಿಸಲು ।
ಇಂದು ಮುಖಿನಿಹಲಿಯನು ಪರಿಪರಿಯಿಂದ ಕೇಳಿ
॥

ಅಲಿಸುತಲವ ನುಡಿದ ನುಡಿಗಳ ।
ಬಾಲೆ ಬಹು ಧೈರ್ಯವನು ತಾಳುತ ।
ಪೇಳಿದಳು ತಾ ಮನವನೊಪ್ಪಿಸಿರುವೆನು ನೃಪಗೆಂದು ।
ಪೇಳುವೆನು ನಿನಗೀಗ ತರುಣನೆ ।
ಕೇಳಚಲವಾಗಿಹುದು ಪ್ರೇಮವು ।
ವೇಳೆಗಳೆಯದೆ ಪೋಗುನಿಲ್ಲದಲೆನುತ ಪೇಳಿದಳು ॥

ಅಲ್ಲಿಯೇ ನಿಂತಿರ್ದ ರಾಜನು ।
ಫುಲ್ಲಲೋಚನೆ ವಚನ ಕೊಡುತಲೆ ।
ಸಲ್ಲದೆನಗೀಗದನು ತಿರುಗಿಸಲೆಂದು ಪೇಳಿದನು ॥

ನಿಲ್ಲಿಸುವದನ್ಯರೊಳು ಪ್ರೇಮವ ।
ಸಲ್ಲದೆನಗೀಕ್ಷಣದಿ ಪೇಳುವೆ ।
ನಿಲ್ಲೆವಾಸಿಪೆ ಬ್ರಹ್ಮಚರ್ಯದೊಳೆಂದು ಪೇಳಿವಳು ॥೨೭॥

ಕಿವಿಗೊಡದೆ ಸುಂದರಿಯ ವಚನಕೆ ।
ಅವನಿಪಾಲನು ಹಯವನೇರುತ ।
ಜವದಿ ನಡೆದನು ಪುರದ ಮಾರ್ಗವ ಪಿಡಿದು ನಿಲ್ಲದಲೆ ॥
ತವಕದಿಂ ನಿರ್ಧರಿಸಿ ಮನದೊಳ ।
ಗವಳು ಹರಿಪೂಜೆಯಲಿ ತಾ ಕಾ ।
ಲವನು ಕಳೆಯುವೆನೆಂದು ಸರದಾರನಿಗೆ ಪೇಳಿವಳು ॥೨೮॥

ಮೋರೆಯನು ಮೇಲ್ಮಾಡದಲೆ ಸರ ।
ದಾರ ಮನದೊಳು ನೊಂದು ಕೊಳ್ಳುತ ।
ದಾರಿಯನು ಪಿಡಿಯುತಲೆ ಸಾಗಿದನಾಗ ಬೇಗದಲಿ ॥
ವಾರಿಜೋದ್ಭವಳಂತೆ ಶೋಭಿಪ ।
ಚಾರುಗಾತ್ರಿಯಳಾದ ನಿಹಲೆಯು ।
ನಾರಸಿಂಹನ ಪೂಜೆಗೈಯುತಲಿರ್ದಳನುದಿನದಿ॥ ॥೨೯॥

---

ಲಘು ಕಾವ್ಯ ಮಾಲಾ

ಪುಷ್ಪ ೧.

ನರಗುಂದ ಸಾವಿತ್ರೀಬಾಯಿ.

ಪುಷ್ಪ ೨.

ಕರ್ನಾಟಕ ಮೊದಲನೇ ಜೋಹರ.

ಪುಷ್ಪ ೩.

ಪ್ರೇಮ ಪ್ರಭಾವ.

ವಿಳಾಸ:— ಎನ್. ವ್ಹಿ. ಕುಲಕರ್ಣಿ, ಬಿ. ಎ. ಕ್ಲಾ
ಕರ್ನಾಟಕ ಕಾಲೇಜ,
ಧಾರವಾಡ

Printed by M. K. Joshi at the Karnatak
Printing Works, DHARWAR.

# ಲಘು ಕಾವ್ಯ ಮಾಲಾ.

ಇದೊಂದು ಕನ್ನಡ ಭಾಷೆಯ ಸೇವೆಗಾಗಿ ಉದಯವಾಗಿರುವ ಗ್ರಂಥ ಮಾಲೆಯು. ಕರ್ನಾಟಕದ ಸ್ಫೂರ್ತಿದಾಯಕ ಐತಿಹಾಸಿಕ ಪ್ರಸಂಗಗಳ ಸುರಮ್ಯ ಚಿತ್ರಗಳನ್ನು ಕವಿತಾರೂಪದಿಂದ ಪ್ರಕಟಿಸುವದೇ ಈ ಗ್ರಂಥಮಾಲೆಯ ಮುಖ್ಯೋದ್ದೇಶವು. ವರ್ಷಕ್ಕೆ ಸುಮಾರು ಹನ್ನೆರಡು ಕುಸುಮಗಳು ಅರಳುವವು. ಒಮ್ಮೆಲೇ ಹತ್ತು ರೂಪಾಯಿಗಳನ್ನು ಕೊಟ್ಟು ಮಾಲೆಯ ಆಶ್ರಯದಾತೃಗಳಾಗುವವರಿಗೆ ಮಾಲೆಯಲ್ಲಿ ಪ್ರಕಟವಾಗುವ ಎಲ್ಲ ಪುಸ್ತಕಗಳನ್ನು ಪುಕ್ಕಟೆಯಾಗಿ ಕೊಡುವೆವು. ಐದು ರೂಪಾಯಿಗಳನ್ನು ಕೊಟ್ಟು ಪೋಷಕರಾಗುವವರಿಗೆ ಎಲ್ಲ ಪುಸ್ತಕಗಳನ್ನು ಅರ್ಧ ಬೆಲೆಗೂ, ಅದರಂತೆ ಮಾಲೆಯಲ್ಲಿ ಪ್ರಕಟವಾಗುವ ಪುಸ್ತಕಗಳನ್ನು ಕೊಳ್ಳುವೆವೆಂದು ಒಪ್ಪಿಕೊಂಡು ಎಂಟುಆಣೆ ಪ್ರವೇಶಧನ ತುಂಬುವ ಪ್ರೋತ್ಸಾಹಕರಿಗೆ ಪ್ರತಿಯೊಂದು ಪುಸ್ತಕವನ್ನು ಮುಕ್ಕಾಲು ಬೆಲೆಗೂ ಕೊಡುವದರಲ್ಲಿ ಬರುವದು.

ಕೇವಲ ನಿಸ್ವಾರ್ಥ ಬುದ್ಧಿಯಿಂದ ಭಾಷಾ ಸೇವೆಯನ್ನೇ ಮಾಡುವದಕ್ಕಾಗಿ ಹೊರಟಿರುವ ಈ ಗ್ರಂಥ ಮಾಲೆಗೆ ಅಖಿಲ ಕರ್ನಾಟಕಸ್ಥರು ಸಹಾಯ ಮಾಡಬೇಕಾಗಿ ಕೋರಿಕೆ.

ಸಂಪಾದಕ—

**ನಾರಾಯಣ ವ್ಯಾಸರಾವ ಕುಲಕರ್ಣಿ**

ಕರ್ನಾಟಕ ಕಾಲೇಜ, ಧಾರವಾಡ.

---

ಇವನ್ನು ಶ್ರೀ. ನಾರಾಯಣರಾವ ವ್ಯಾಸರಾವ ಕುಲಕರ್ಣಿ ಇವರು ಧಾರವಾಡ ಮಾಳಮಡ್ಡಿಯಲ್ಲಿ ಪ್ರಸಿದಿಸಿದರು.